ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಸೇವೆಯಲ್ಲಿ ಅನುದಾನಿತ ಶಿಕ್ಷಕರಿಗೆ ಖಾಯಂ ಮಾಡುವ ಕುರಿತು

ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

952 (1076) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಮತ್ತು ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕಾರವಾರ ಜಿಲ್ಲೆಯ ಹಳಿಯಾಳ ಪಟ್ಟಣದ ಶಿವಾಜಿ ಪ್ರೌಢ ಶಾಲೆಯಲ್ಲಿ ಕಳೆದ 22 ವರ್ಷಗಳಿಂದ ಅರೆಕಾಲಿಕ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಒಬ್ಬ ಶಿಕ್ಷಕನನ್ನು ಇಲ್ಲಿಯವರೆಗೆ ಖಾಯಂ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು)

(ಆ) 2007ರಲ್ಲಿ ಅರೆಕಾಲಿಕ ಶಿಕ್ಷಕರನ್ನು ಖಾಯಂ ಮಾಡುವ ಸಂದರ್ಭದಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 16 ಎಸ್.ಎಲ್.ಬಿ 1996, ದಿನಾಂಕ : 09/01/2016 ರನ್ವಯ 2(I) (IV) ರಲ್ಲಿ 1996-97ನೇ ಸಾಲಿಗೆ ಕನಿಷ್ಟ ಒಂದು ವರ್ಷ ಸೇವೆ ಸಲ್ಲಿಸಿರಬೇಕು ಎಂಬ ನಿಯಮಾವಳಿಯನ್ನು ಪೂರೈಸದ ಕಾರಣ ಸೇವಾ ಸಕ್ರಮಾತಿಯಿಂದ ಸಂಬಂಧಿಸಿದವರ ಹೆಸರನ್ನು ಕೈಬಿಡಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಬಂದಿದ್ದಲ್ಲಿ, ಮಾನವೀಯತೆ ದೃಷ್ಟಿಯಿಂದ ಇವರು ಮಾಡಿರುವ ಸೇವೆಯನ್ನು ಪರಿಗಣಿಸಿ ಖಾಯಂಗೊಳಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ? (ವಿವರ ನೀಡುವುದು)